KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – V | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ನಂ. ೪೦೯ |
|---|---|---|

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು. ಇವರ ಕಾರ್ಯಾಲಯ**

**ತಿದ್ದುಪಡಿ (CORRIGENDUM)**

**ಸಂಖ್ಯೆ: ಜಿ12/ಪ್ರೌಶಾಶಿ/ನೇಮಕ.01/2009–10, ದಿನಾಂಕ: 3ನೇ ಜೂನ್, 2009**

2009–10 ನೇ ಸಾಲಿನಲ್ಲಿ ಮೈಸೂರು ವಿಭಾಗದ ವ್ಯಾಪ್ತಿಯಲ್ಲಿ ಬರುವ ಎಂಟು ಶೈಕ್ಷಣಿಕ ಜಿಲ್ಲೆಗಳಲ್ಲಿನ (ಮೈಸೂರು, ಚಾಮರಾಜನಗರ, ಮಂಡ್ಯ, ಹಾಸನ, ಚಿಕ್ಕಮಗಳೂರು, ಕೊಡಗು, ದಕ್ಷಿಣ ಕನ್ನಡ ಮತ್ತು ಉಡುಪಿ) ಸರ್ಕಾರಿ ಪ್ರೌಢಶಾಲೆ/ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿನ ಪ್ರೌಢ ಶಾಲಾ ವಿಭಾಗಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಶಿಕ್ಷಕರು ಗ್ರೇಡ್–2 (ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮ) ಮತ್ತು ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ಹುದ್ದೆಗಳಿಗೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ, ನೇಮಕಾತಿ ಮಾಡುವ ಸಂಬಂಧದಲ್ಲಿ ಸಂಖ್ಯೆ. ಜಿ12.ಪ್ರೌಶಾಶಿ.ನೇಮಕ.01/2009–10, ದಿನಾಂಕ: 18/05/2009 ರಂದು (ಕರ್ನಾಟಕ ವಿಶೇಷ ರಾಜ್ಯ ಪತ್ರ ಭಾಗ–5, ಸಂಖ್ಯೆ. 307) ಅಧಿಕೃತ ಅಧಿಸೂಚನೆಯನ್ನು ಹೊರಡಿಸಲಾಗಿತ್ತು.

ಸದರಿ ಅಧಿಸೂಚನೆಯಲ್ಲಿ ದಿನಾಂಕ: 08/08/2009 ಮತ್ತು 09/08/2009 ರಂದು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಲು ವೇಳಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಪ್ರಸ್ತುತ ದಿನಾಂಕ: 18/05/2009 ರಂದು ಅಧಿಸೂಚನೆಯಲ್ಲಿ ನಿಗಧಿಪಡಿಸಲಾದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವೇಳಾಪಟ್ಟಿಯನ್ನು ಈ ಮುಂದಿನಂತೆ ಪರಿಷ್ಕರಿಸಿದೆ. ಪರಿಷ್ಕೃತ ವೇಳಾಪಟ್ಟಿಯಂತೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಲಾಗುತ್ತದೆ.

**ಪ್ರೌಢ ಶಾಲಾ ಸಹಶಿಕ್ಷಕರು/ದೈಹಿಕ ಶಿಕ್ಷಣ ಶಿಕ್ಷಕರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪರಿಷ್ಕೃತ ವೇಳಾಪಟ್ಟಿ 2009–10.**

| ದಿನಾಂಕ | ಸಮಯ | ಪರೀಕ್ಷಾ ವಿಷಯ |
|---|---|---|
| 08–08–2009 ಶನಿವಾರ | ಬೆಳಿಗ್ಗೆ 09–00 ರಿಂದ 11–00 | ಪತ್ರಿಕೆ–1 (ಸಾಮಾನ್ಯ ಪತ್ರಿಕೆ) (ಎಲ್ಲಾ ವಿಷಯ ಹಾಗೂ ಮಾಧ್ಯಮದ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ) |
| | ಮಧ್ಯಾಹ್ನ 12–00 ರಿಂದ 02–00 | ಪತ್ರಿಕೆ–2 (ಕಲಾ) |
| | ಮಧ್ಯಾಹ್ನ 03–00 ರಿಂದ 05–00 | ಪತ್ರಿಕೆ–2 (ಭೌತಶಾಸ್ತ್ರ/ಜೀವಶಾಸ್ತ್ರ) |
| 09–08–2009 ಭಾನುವಾರ | ಬೆಳಿಗ್ಗೆ 09–00 ರಿಂದ 11–00 | ಪತ್ರಿಕೆ–2 (ದೈಹಿಕ ಶಿಕ್ಷಣ) |
| | ಮಧ್ಯಾಹ್ನ 12–00 ರಿಂದ 02–00 | ಪತ್ರಿಕೆ–2 (ಕನ್ನಡ ಭಾಷೆ) |
| | ಮಧ್ಯಾಹ್ನ 03–00 ರಿಂದ 05–00 | ಪತ್ರಿಕೆ–2 (ಇಂಗ್ಲೀಷ್ ಭಾಷೆ) |
| 10–08–2009 ಸೋಮವಾರ | ಬೆಳಿಗ್ಗೆ 09–00 ರಿಂದ 11–00 | ಪತ್ರಿಕೆ–2 (ಹಿಂದಿ ಭಾಷೆ) |
| | ಮಧ್ಯಾಹ್ನ 12–00 ರಿಂದ 02–00 | ಪತ್ರಿಕೆ–2 (ಉರ್ದು ಭಾಷೆ) |
| | ಮಧ್ಯಾಹ್ನ 03–00 ರಿಂದ 05–00 | ಪತ್ರಿಕೆ–2 (ಸಂಸ್ಕೃತ ಭಾಷೆ) |

ಉಳಿದಂತೆ ನೇಮಕಾತಿ ಅಧಿಸೂಚನೆಯಲ್ಲಿ ಹುದ್ದೆಗಳಿಗೆ ನಿಗದಿಪಡಿಸಿರುವ ವಿದ್ಯಾರ್ಹತೆ, ವೇತನಶ್ರೇಣಿ, ವಯೋಮಿತಿ, ಹಾಗೂ ಮೀಸಲಾತಿ ವರ್ಗೀಕರಣ ಮತ್ತು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದ ವಿವರಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ. ಅಧಿಸೂಚನೆಯಲ್ಲಿ ವಿಧಿಸಿರುವ ಷರತ್ತುಗಳು ಯಥವತ್ತಾಗಿ ಮುಂದುವರೆಯುತ್ತವೆ.

**ಎನ್. ಕುಮಾರಸ್ವಾಮಿ**
ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು
ಸಾರ್ವಜನಿಕ ಶಿಕ್ಷಣ ಇಲಾಖೆ,
ಮೈಸೂರು ವಿಭಾಗ, ಮೈಸೂರು.

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ನಂ. ೪೧೦ |
|---|---|---|

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಕಾರ್ಯಾಲಯ, ಆಯುಕ್ತಾಲಯ ಗುಲಬರ್ಗಾ**

**ತಿದ್ದುಪಡಿ ನೇಮಕಾತಿ ಅಧಿಸೂಚನೆ**

**ಸಂಖ್ಯೆ: ಇ1(ಎ)ಆಡಳಿತ/ಪ್ರೌಶಾಶಿ/ಆಯ್ಕೆ/99/2009–10, ದಿನಾಂಕ : 03–06–2009**

**ವಿಷಯ:–** 2009–10ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲಬರ್ಗಾ ವಿಭಾಗ ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ವೃಂದದ ಶಿಕ್ಷಕರನ್ನು ನೇರ ನೇಮಕಾತಿ ಮೂಲಕ ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** ದಿನಾಂಕ 18–05–2009 ರಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆ ಸಂಖ್ಯೆ: 311 ರನ್ವಯ ಪ್ರಕಟಿಸಲಾದ ನೇಮಕಾತಿ ಅಧಿಸೂಚನೆ ಸಂಖ್ಯೆ: ಇ1(ಎ)ಆಡಳಿತ/ಪ್ರೌಶಾಶಿ/ಆಯ್ಕೆ/99/2009–10

ಆಯ್ಕೆ ಪ್ರಾಧಿಕಾರಿಗಳು ಹಾಗೂ ವಿಭಾಗೀಯ ಕಾರ್ಯದರ್ಶಿಗಳು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತಾಲಯ ಗುಲಬರ್ಗಾ, ಈ ಕಚೇರಿಯಿಂದ ಹೊರಡಿಸಲಾದ ನೇಮಕಾತಿ ಅಧಿಸೂಚನೆ ಸಂಖ್ಯೆ: ಇ1(ಎ)/ಆಡಳಿತ/ಪ್ರೌಶಾಶಿ/ಆಯ್ಕೆ/99/2009–10 ದಿನಾಂಕ: 18.05.2009 ರನ್ವಯ ವಿಭಾಗದ ಎಲ್ಲಾ ಶೈಕ್ಷಣಿಕ ಜಿಲ್ಲೆಗಳಲ್ಲಿ ಖಾಲಿ ಇರುವ ವಿವಿಧ ವಿಷಯಗಳ ಹಾಗೂ ಮಾಧ್ಯಮದ ಪ್ರೌಢ ಶಾಲಾ ಸಹ ಶಿಕ್ಷಕರು ಗ್ರೇಡ್–2 ಮತ್ತು ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ಹುದ್ದೆಗಳಿಗೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಆಯ್ಕೆ ಹಾಗೂ ನೇಮಕಾತಿ ಮಾಡಲು ಉಲ್ಲೇಖಿತ ನೇಮಕಾತಿ ಅಧಿಸೂಚನೆ ಹೊರಡಿಸಲಾಗಿದೆ. ಸದರಿ ನೇಮಕಾತಿ ಅಧಿಸೂಚನೆಯ ಪುಟ ಸಂಖ್ಯೆ (11), ಕಂಡಿಕೆ –12(iii) ರಲ್ಲಿ ಪರೀಕ್ಷೆ ನಡೆಸುವ ದಿನಾಂಕ ಶನಿವಾರ 08–08–2009 ಮತ್ತು ಭಾನುವಾರ 09–08–2009 ಎಂದು ನಮೂದಿಸಲಾಗಿರುವದನ್ನು ದಿನಾಂಕ: 08–08–2009 ರಿಂದ 11–08–2009 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು, ಮುಂದುವರೆದು ಕಂಡಿಕೆ 12(iv) ರಲ್ಲಿ ಪರೀಕ್ಷೆಯ ಅವಧಿ ಮತ್ತು ಸಮಯ ಈ ಕೆಳಗಿನಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

**ಪ್ರೌಢ ಶಾಲಾ ಸಹ ಶಿಕ್ಷಕರ/ದೈಹಿಕ ಶಿಕ್ಷಣ ಶಿಕ್ಷಕರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪರಿಷ್ಕೃತ ವೇಳಾ ಪಟ್ಟಿ 2009–10**

**ಶನಿವಾರ, ದಿನಾಂಕ: 08–08–2009**

| ಪರೀಕ್ಷೆಯ ಸಮಯ | ಪರೀಕ್ಷಾ ವಿಷಯ |
|---|---|
| ಬೆಳಿಗ್ಗೆ 9.00 ರಿಂದ 11.00 ಗಂಟೆಯ ರವರೆಗೆ | **ಪತ್ರಿಕೆ–1** (ಸಾಮಾನ್ಯ ಪತ್ರಿಕೆ) (ಎಲ್ಲಾ ವಿಷಯ ಹಾಗೂ ಮಾಧ್ಯಮದ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ) |
| ಮಧ್ಯಾಹ್ನ 12.00 ರಿಂದ 2.00 ಗಂಟೆಯ ವರಗೆ | **ಪತ್ರಿಕೆ–2** (ಕಲಾ) |
| ಮಧ್ಯಾಹ್ನ 3.00 ರಿಂದ 5.00 ಗಂಟೆಯ ವರಗೆ | **ಪತ್ರಿಕೆ–2** (ಭೌತ ವಿಜ್ಞಾನ / ಜೀವ ವಿಜ್ಞಾನ) |

**ಭಾನುವಾರ, ದಿನಾಂಕ: 09–08–2009**

| ಪರೀಕ್ಷೆಯ ಸಮಯ | ಪರೀಕ್ಷಾ ವಿಷಯ |
|---|---|
| ಬೆಳಿಗ್ಗೆ 9.00 ರಿಂದ 11.00 ಗಂಟೆಯ ವರಗೆ | **ಪತ್ರಿಕೆ–2** (ದೈಹಿಕ ಶಿಕ್ಷಣ) |
| ಮಧ್ಯಾಹ್ನ 12.00 ರಿಂದ 02.00 ಗಂಟೆಯ ವರಗೆ | **ಪತ್ರಿಕೆ–2** (ಕನ್ನಡ ಭಾಷೆ) |
| ಮಧ್ಯಾಹ್ನ 3.00 ರಿಂದ 5.00 ಗಂಟೆಯ ವರಗೆ | **ಪತ್ರಿಕೆ–2** (ಆಂಗ್ಲ ಭಾಷೆ) |

**ಸೋಮವಾರ, ದಿನಾಂಕ: 10–08–2009**

| ಪರೀಕ್ಷೆಯ ಸಮಯ | ಪರೀಕ್ಷಾ ವಿಷಯ |
|---|---|
| ಬೆಳಿಗ್ಗೆ 9.00 ರಿಂದ 11.00 ಗಂಟೆಯ ವರಗೆ | **ಪತ್ರಿಕೆ –2** (ಹಿಂದಿ ಭಾಷೆ) |
| ಮಧ್ಯಾಹ್ನ 12.00 ರಿಂದ 02.00 ಗಂಟೆಯ ವರಗೆ | **ಪತ್ರಿಕೆ –2** (ಉರ್ದು ಭಾಷೆ) |
| ಮಧ್ಯಾಹ್ನ 3.00 ರಿಂದ 05.00 ಗಂಟೆಯ ವರಗೆ | **ಪತ್ರಿಕೆ–2** (ಸಂಸ್ಕೃತ ಭಾಷೆ) |

**ಮಂಗಳವಾರ ದಿನಾಂಕ: 11–08–2009**

| ಪರೀಕ್ಷೆಯ ಸಮಯ | ಪರೀಕ್ಷಾ ವಿಷಯ |
|---|---|
| ಬೆಳಿಗ್ಗೆ 9.00 ರಿಂದ 11.00 ಗಂಟೆಯ ವರಗೆ | **ಪತ್ರಿಕೆ–2** (ಮರಾಠಿ ಭಾಷೆ) |
| ಮಧ್ಯಾಹ್ನ 12.00 ರಿಂದ 2.00 ಗಂಟೆಯ ವರಗೆ | **ಪತ್ರಿಕೆ–2** (ತೆಲಗು ಭಾಷೆ) |
| ಮಧ್ಯಾಹ್ನ 3.00 ರಿಂದ 5.00 ಗಂಟೆಯ ವರಗೆ | **ಪತ್ರಿಕೆ–2** (ತಮಿಳು ಭಾಷೆ) |

ನೇಮಕಾತಿ ಅಧಿಸೂಚನೆ ದಿನಾಂಕ: 18–05–2009 ರಲ್ಲಿ ಪ್ರಕಟಿಸಿದಂತೆ ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳ ವಿದ್ಯಾರ್ಹತೆ, ವೇತನ ಶ್ರೇಣಿ, ವಯೋಮಿತಿ, ವರ್ಗೀಕರಣ ಮತ್ತು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದಲ್ಲಿ ಯಾವದೇ ಬದಲಾವಣೆ ಇರುವದಿಲ್ಲ. ಸದರಿ ಅಧಿಸೂಚನೆಯಲ್ಲಿನ ಷರತ್ತುಗಳು ಯಥಾವತ್ತಾಗಿ ಮುಂದುವರೆಯುತ್ತವೆ.

**ವೈ.ಟಿ. ಗುರುಮೂರ್ತಿ**
ಆಯ್ಕೆಪ್ರಾಧಿಕಾರಿಗಳು/ಕಾರ್ಯದರ್ಶಿಗಳು
ಪದನಿಮಿತ್ತ ಸಹನಿರ್ದೇಶಕರು ಸಾ.ಶಿ.ಇ. ಆಯುಕ್ತಾಲಯ ಗುಲಬರ್ಗಾ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ನಂ. ೪೧೧ |
|---|---|---|

**Parliamentary Affairs and Legislation Secretariat**
**NOTIFICATION**
**No: DPAL 21 SHASANA 2009, Bangalore, dated: 4th June, 2009**

The Karnataka Municipal Corporations (Amendment) Ordinance, 2009 promulgated by the Governor of Karnataka in the sixtieth year of the Republic of India, be published as Karnataka Ordinance No. 4 of 2009 in the Karnataka Gazette for general information.

**KARNATAKA ORDINANCE NO. 4 OF 2009**

**THE KARNATAKA MUNICIPAL CORPORATIONS (AMENDMENT) ORDINANCE, 2009**

**(Promulgated by the Governor of Karnataka in the Sixtieth year of the Republic of India and First published in the Karnataka Gazette Extra-ordinary on the Fourth day of June 2009)**

An Ordinance further to amend the Karnataka Municipal Corporations Act, 1976.

Whereas both the Houses of the Karnataka State Legislature are not in session and the Governor of Karnataka is satisfied that the circumstances exist which render it necessary for him to take immediate action, further to amend the Karnataka Municipal Corporations Act, 1976 (Karnataka Act 14 of 1977) for the purposes hereinafter appearing;

Now, therefore in exercise of the powers conferred by clause (1) of Article 213 of the Constitution of India, the Governor of Karnataka is pleased to promulgate the following Ordinance, namely:-

**1. Short title and commencement.-** (1) This Ordinance may be called the Karnataka Municipal Corporations (Amendment) Ordinance, 2009.

(2) It shall come into force at once.

**2. Amendment of section 7.-** In the Karnataka Municipal Corporations Act,1976 (Karnataka Act 14 of 1977) (hereinafter referred to as the principal Act) , in section 7 in sub-section (1),-

(i) in clause (a) for the words "one hundred and fifty" the words "two hundred" shall be substituted; and

(ii) in clause (b) for the words "not more than ten persons in the case of Bangalore City Corporation" the words " not exceeding ten percent of the total number of Councilors in the case of Bruhat Bangalore Mahanagara Palike" shall be substituted.

**3. Substitution of expressions.-** In the principal Act, for the expressions "Bangalore City Corporation" or "Corporation of the City of Bangalore" wherever they occur, the expression "Bruhat Bangalore Mahanagara Palike" shall be substituted.

**RAMESHWAR THAKUR**
GOVERNOR OF KARNATAKA
By order and in the name of the Governor of Karnataka,
**G.K. BOREGOWDA**
Secretary to Government
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ನಂ. ೪೧೨ |
|---|---|---|

**Parliamentary Affairs and Legislation Secretariat**
**NOTIFICATION**
**No: DPAL 23 SHASANA 2009, Bangalore, dated: 4th June, 2009**

The Karnataka Stamp (Amendment) Ordinance, 2009 promulgated by the Governor of Karnataka in the sixtieth year of the Republic of India, be published as Karnataka Ordinance No. 5 of 2009 in the Karnataka Gazette for general information.

**KARNATAKA ORDINANCE NO. 5 OF 2009**

**THE KARNATAKA STAMP (AMENDMENT) ORDINANCE, 2009**

**(Promulgated by the Governor of Karnataka in the Sixtieth year of the Republic of India and First published in the Karnataka Gazette Extra-ordinary on the Fourth day of June 2009)**

An Ordinance further to amend the Karnataka Stamp Act, 1957.

Whereas both Houses of the State Legislature are not in session and the Governor of Karnataka is satisfied that circumstances exist which render it necessary for him to take immediate action further to amend the Karnataka Stamp Act, 1957 (Karnataka Act 34 of 1957) for the purposes hereinafter appearing;

Now, therefore, in exercise of the powers conferred by clause (1) of Article 213 of the Constitution of India, the Governor of Karnataka is pleased to promulgate the following Ordinance, namely:-

**1. Short title and commencement.-** (1) This Ordinance may be called the Karnataka Stamp (Amendment) Ordinance, 2009.

(2) It shall come into force with immediate effect.

**2. Amendment of the Schedule.-** In the Karnataka Stamp Act, 1957 (Karnataka Act 34 of 1957), in the Schedule,-

(1) in Article 20,-

(i) in clause (1), in column (2), the proviso shall be omitted.

(ii) in clause (2), in column (3), for the words "seven and a half percent" the words, brackets and figures "the same duty as a conveyance under Article 20(1)" shall be substituted.

(2) In Article 41, in clause (eb), in column (3), for the words "seven rupees and fifty paise for every one hundred rupees or part thereof" the words, brackets and figures "the same duty as a conveyance under Article 20(1)" shall be substituted.

**RAMESHWAR THAKUR**
GOVERNOR OF KARNATAKA
By order and in the name of the Governor of Karnataka,
**G.K. BOREGOWDA**
Secretary to Government
Department of Parliamentary Affairs and Legislation

**ವಿಶೇಷ ಪತ್ರಿಕೆ**

| ಭಾಗ – I | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ನಂ. ೪೧೩ |
|---|---|---|

**PROCEEDINGS OF THE GOVERNMENT OF KARNATAKA**

**Urban Development Secretariat**

**Sub :** **Delimitation of Wards in Bruhat Bangalore Mahanagara Palike - modification of guidelines – reg.**

**Read** :
1. Notification No. UDD 92 MNY 2006 dated 16.1.2007.
2. Notification No. UDD 59 MLR 2006 dated 14.8.2007.
3. Notification No. ಸಂವ್ಯಶಾಇ 34 ಶಾಸನ 2006, ದಿನಾಂಕ 7.5.2007.
4. Notification No. UDD 102 MLR 2007 dated 18.8.2008.
5. Notification No. ಸಂವ್ಯಶಾಇ 21 ಶಾಸನ 2009, ದಿನಾಂಕ 4.6.2009.

**PREAMBLE:**

In Notification dated 16.1.2007, read at Sl. No. 1 above Bruhat Bangalore Mahanagara Palike was constituted in exercise of the power conferred by Section 3 read with clause (a) of sub-section (1) of section 4 of the Karnataka Municipal Corporations Act, 1976 (Karnataka Act, 14 of 1977) by merging 7 City Municipal Councils, 1 Town Municipal Council and 110 urbanized villages.

In Government order No. UDD 59 MLR 2006 dated 14.8.2007 read at Sl.No. 2 above. guidelines in respect of Bruhat Bangalore Mahanagara Palike were issued in view of the amendment to Section 7(1)(a) of Karnataka Municipal Corporation Act, 1976 in Notification dated 7.5.2007 read at Sl.No. 3 above. Accordingly delimitation exercise in respect of Bruhat Bangalore Mahanagara Palike was taken up for proposing delimiting Bruhat Bangalore Mahanagara Palike in to 147 wards. Accordingly draft notification dated 18.8.2008 vide Sl.No. 4 above was issued.

After detailed examination of the objections received for the draft proposal Government considered it appropriate to enhance the number of wards. While examining the matter Government felt that there are very large wards in the peripheral areas which comprised erstwhile 110 villages and presently there is increase in population due to rapid growth. Therefore, it is considered necessary to modify the guidelines prescribing the average population of each ward depending upon the geographical features, facilitating proximity of ward level governance and administration, means of communication, public convenience, contiguity of the areas.

In view of the circumstances an Amendment to Section 7 (1) of Karnataka Municipal Corporation Act, 1976 is notified in Karnataka Municipal Corporation Ordinance 2009 (Karnataka Ordinance No. 4 of 2009) vide notification dated 04.06.2009 read at (5) above.

In view of the above facts it is considered necessary to modify the guidelines issued in dated 14.8.2007 for delimitation of wards to Bruhat Bangalore Mahanagara Palike into 198 wards and rescind the preliminary notification dated 18.8.2008 read at (4) above. Hence the order:

**Government Order No.UDD 59 MLR 2009, Bangalore, Dated : 4th June, 2009**

After careful and detailed examination of all aspects of the matter Government are pleased to modify the guidelines in respect of the delimitation of wards in Urban Local Bodies, in so far as Bruhat Bangalore Mahanagara Palike is concerned, as follows;-

1. Government order No.UDD 102 MLR 2007 dated 18.8.2008 is rescinded.
2. The total population of Bruhat Bangalore Mahanagara Palike as per the 2001 Census shall be divided on the average basis to constitute not less then 198 wards.
3. While doing the delimitation exercise of Bruhat Bangalore Mahanagara Palike, a ward has to be carved out with an average population of 30,000 (plus or minus 20%) in the core areas and as exception minimum population in respect of wards in newly added peripheral areas can be relaxed to 20,000.
4. A draft notification in the official gazette shall be published for calling objections/ suggestions from the general public giving 7 days time from the date of such publication.

By order and in the name of the Governor of Karnataka,

**C.R. RAVINDRA**
Under Secretary to Government
Urban Development Department

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜೂನ್ ೫, ೨೦೦೯ (ಜ್ಯೇಷ್ಠ ೧೫, ಶಕ ವರ್ಷ ೧೯೩೧) | ನಂ. ೪೧೪ |
|---|---|---|

**Home Secretariat**

**ADDENDUM**

**No. HD 230 SST 2009, Bangalore, dated: 24th April, 2009**

In Government Order No. HD 837 SST 2006, dated: 25.4.2008 constituting a committee under the Chairmanship of Chief Secretary to Government of Karnataka for implementing development schemes and solving socio-economic problems in naxal affected districts, the following officers are also included as members:

1. The Principal Secretary to Government, Finance Department
2. The Principal Secretary to Government, Planning and Statistics Department.

By order and in the name of the Governor of Karnataka,

**K.C. SIDDAPPA**

Under Secretary to Government

Home Department (Law and Order)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಶನಿವಾರ, ಜೂನ್ ೬, ೨೦೦೯ (ಜ್ಯೇಷ್ಠ ೧೬, ಶಕ ವರ್ಷ ೧೯೩೧) | ನಂ. ೪೧೫ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ ಅಧಿಸೂಚನೆ**

**ಸಂಖ್ಯೆ: ಸಿಐ 735 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ: 5ನೇ ಜೂನ್, 2009**

ಕೈಗಾರಿಕಾ ಪ್ರದೇಶಕ್ಕಾಗಿ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿ, ಹೆಬ್ಬಾಳ ಗ್ರಾಮದಲ್ಲಿನ ವಿವಿಧ ಸರ್ವೆ ನಂಬರ್‌ಗಳಲ್ಲಿ ಇರುವ ಜಮೀನುಗಳನ್ನು ಸ್ವಾಧೀನಪಡಿಸಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 3(1) 1(3) ಹಾಗೂ 28(1)ರ ಪ್ರಕಾರ ಕರ್ನಾಟಕ ಸರ್ಕಾರದ ಅಧಿಸೂಚನೆಯ ಸಂಖ್ಯೆ: ಸಿಐ 536 ಎಸ್‌ಪಿಕ್ಯೂ 2006, ದಿನಾಂಕ: 29.1.2007ರನ್ವಯ ಪುಟ ಸಂಖ್ಯೆ: 5ರಿಂದ 6ರಂತೆ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆ ಭಾಗ–3–1ರಲ್ಲಿ ಪ್ರಕಟಿಸಲಾಗಿದೆ.

ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿ ನಮೂದಿಸಿರುವ ಜಮೀನುಗಳಿಗೆ ಕಂಪನಿಯವರು ಸರ್ಕಾರದ ಷರತ್ತಿನಂತೆ ಭೂ ಮಾಲೀಕರ ಸಹಮತಿಯನ್ನು ಪಡೆಯಲು ವಿಫಲರಾದ ಕಾರಣ ಈ ಜಮೀನುಗಳನ್ನು ಭೂಸ್ವಾಧೀನ ಕ್ರಮದಿಂದ ಕೈಬಿಡಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 4ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಜಮೀನನ್ನು ಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲಾಗಿದೆ.

**ಜಿಲ್ಲೆ: ಬೆಂಗಳೂರು ನಗರ** **ತಾಲ್ಲೂಕು : ಬೆಂಗಳೂರು ಉತ್ತರ**

**ಹೋಬಳಿ : ಕಸಬಾ** **ಗ್ರಾಮ : ಹೆಬ್ಬಾಳ**

| ಕ್ರ. ಸಂ. | ಸರ್ವೆ ನಂಬರ್ | ವಿಸ್ತೀರ್ಣ ಎ – ಗುಂ |
|---|---|---|
| 1. | 43/1ಎ1 | 2 - 22 |
| 2. | 43/1ಎ2 | 2 - 34 |
| 3. | 44/3ಎ | 0 - 14 |
| 4. | 44/3ಬಿ | 0 - 11 |
| 5. | 44/3ಸಿ | 0 - 11 |
| 6. | 44/3ಡಿ | 0 - 10 |
| 7. | 44/3ಇ | 0 – 10 |
| 8. | 44/3ಎಫ್ | 0 – 09 |
| | **ಒಟ್ಟು** | **7 - 01** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ. ಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ನಂ. ೩೮೧ |
|---|---|---|


**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ**

**ನೇಮಕಾತಿ ಅಧಿಸೂಚನೆ**

**ಸಂಖ್ಯೆ: ಸಿ3(1) ಪ್ರಾಶಾಶಿ : ನೇಮಕ : 2009–10, ದಿನಾಂಕ: 4ನೇ ಜೂನ್, 2009**

**ವಿಷಯ :–** 2009–10ನೇ ಸಾಲಿಗಾಗಿ ಸರ್ಕಾರಿ ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :–**
1) ಸರ್ಕಾರದ ಅಧಿಕೃತ ಪ್ರಕಟಣೆ ಸಂಖ್ಯೆ:ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ: 9.8.2001.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95, ದಿ: 20.06.1995.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002, ದಿ: 22.11.2002.
4) ಸರ್ಕಾರಿ ಆದೇಶ ಸಂಖ್ಯೆ: ಇಡಿ325 ಎಂಸಿಡಿ 2006, ದಿ: 15.12.2006.
5) ಸರ್ಕಾರ ಆದೇಶ ಸಂಖ್ಯೆ: ಸಿಆಸುಇ:53:ಸೇನೇನಿ:2007, ದಿ: 04.01.2008.
6) ಸರ್ಕಾರಿ ಆದೇಶ ಸಂಖ್ಯೆ: ಇಡಿ:214:ಎಂ.ಸಿಡಿ:2007, [ಭಾಗ], ದಿ: 26.05.2009 [ಇಡಿ:66:ಸ್ವೀಮರ (ಯುನಿಕ್), ದಿನಾಂಕ:26.05.2009]
7) ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ:16:ಸೇನೆನಿ:2008, ದಿ: 01.09.2008.

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಅಂದರೆ "**ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್ಸ್‌ಸ್ಟ್ರಕ್ಷನ್] [ರಿಕ್ರೂಟ್‌ಮೆಂಟ್] [ಅಮೆಂಡ್‌ಮೆಂಟ್] ರೂಲ್ಸ್ 2001 [ಸಂ:ಡಿಪಿಎಆರ್:.41:ಎಸ್ಆರ್ಇ:2001 ದಿನಾಂಕ:09.08.2001**"]ರ ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ **ದಿನಾಂಕ: 10.08.2009 ರಂದು** ಅರ್ಹರಾಗಿರುವ ಅಭ್ಯರ್ಥಿಗಳಿಂದ, ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಅರ್ಜಿಗಳನ್ನು ಕರೆಯಲಾಗಿದೆ. ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

**ಟಿಪ್ಪಣಿ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

**1. ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು ಹಾಗೂ ವೇತನ ಶ್ರೇಣಿ :**

01. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲಗು, ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.
02. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ವಿಜ್ಞಾನ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲಗು, ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.
03. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲಗು, ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.
04. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ಹಿಂದಿ] ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

**ವೇತನ ಶ್ರೇಣಿ: 6800–150–7100–175–7800–200–8600–225–9500–250–10500–300–12300–350–13000.**

**2. ಆಯ್ಕೆಗೆ ಅರ್ಹತೆ:**

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ. ಅಥವಾ ಪಿ.ಯುಸಿ.ಯಲ್ಲಿ ಪ್ರಥಮ / ದ್ವಿತೀಯ ಭಾಷೆಯಾಗಿ ಅಥವಾ ಮಾಧ್ಯಮವಾಗಿ ವ್ಯಾಸಂಗ ಮಾಡಿರಬೇಕು.

**3. ನಿಗದಿತ ಅರ್ಜಿ ನಮೂನೆ ದೊರೆಯುವ ಸ್ಥಳ:**

ನಿಗದಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕದಲ್ಲಿ ಲಗತ್ತಿಸಲಾಗಿದೆ. ಈ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕವು ಎಲ್ಲಾ ವರ್ಗದ ಹುದ್ದೆಗಳಿಗೆ ಅಂದರೆ ಸಾಮಾನ್ಯ, ವಿಜ್ಞಾನ, ಆಂಗ್ಲ ಮತ್ತು ಹಿಂದಿ, ಉರ್ದು ಇತ್ಯಾದಿ ಹುದ್ದೆಗಳಿಗೆ ಒಂದೇ ಆಗಿರುತ್ತದೆ. ಈ ಪುಸ್ತಕವು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು [ಆಡಳಿತ] ರವರ ಕಛೇರಿಗಳಲ್ಲಿ ದಿನಾಂಕ: 09.07.2009 ರಿಂದ ದಿನಾಂಕ:10.08.2009 ರವರೆಗೆ ಕಾರ್ಯಾಲಯದ ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10.00 ರಿಂದ ಸಂಜೆ 5.30 ರವರೆಗೆ ದೊರೆಯುತ್ತದೆ. ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು ವಿಶೇಷಾಧಿಕಾರಿ, ಕೇಂದ್ರೀಯ ದಾಖಲಾತಿ ಘಟಕ, ಬೆಂಗಳೂರು ಇವರ ಹೆಸರಿನಲ್ಲಿ ನಿಗದಿಪಡಿಸಿದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರು ಶಾಖೆಯಲ್ಲಿ ತ್ರಿಪ್ರತಿ ಚಲನ್ ನಲ್ಲಿ **[Payable at 007** ಎಂದು ಬರೆದು] ಹಣ ಪಾವತಿಸಿ ಮಾಹಿತಿ ಪುಸ್ತಕ ಮತ್ತು ಅರ್ಜಿ ನಮೂನೆ ಪುಸ್ತಕಗಳನ್ನು ಪಡೆಯಬಹುದು.

**4. ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕದ ಶುಲ್ಕ :**

1. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ : ರೂ. 150.00
2. ಇತರೆ ಎಲ್ಲಾ ಅಭ್ಯರ್ಥಿಗಳಿಗೆ : ರೂ. 300.00
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್:142:ಎಸ್‌ಆರ್‌ಆರ್:2006, ದಿ: 05.11.2007ರ ರೀತ್ಯಾ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಪಾವತಿಸಲು ವಿನಾಯ್ತಿ ಕಲ್ಪಿಸಿದೆ.

**5. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:**

ದಿನಾಂಕ:10.08.2009ರ ಸಂಜೆ 5.30 ಒಳಗೆ ಅಥವಾ ಅದಕ್ಕೂ ಮೊದಲು.

**6. ಅರ್ಜಿ ಸ್ವೀಕರಿಸುವ ಸ್ಥಳ ಹಾಗೂ ವಿಳಾಸ:**

ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಯ ದ್ವಿಪ್ರತಿಗಳನ್ನು [ಸಿ.ಎ.ಸಿ. ಪ್ರತಿ, ಮತ್ತು ಉಪನಿರ್ದೇಶಕರ ಪ್ರತಿ] ಭರ್ತಿ ಮಾಡಿ, ಪ್ರಮಾಣ ಪತ್ರಗಳ ಸ್ವದೃಢೀಕೃತ ಜೆರಾಕ್ಸ್ ಪ್ರತಿಗಳು ಮತ್ತು ಆರು [06] ಭಾವಚಿತ್ರಗಳೊಂದಿಗೆ ದಿನಾಂಕ:10.08.2009ರಂದು ಸಂಜೆ 5.30 ರೊಳಗೆ ಅಥವಾ ಅದಕ್ಕೂ ಮೊದಲು ಸಂಬಂಧಿಸಿದ "**ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪ ನಿರ್ದೇಶಕರು [ಆಡಳಿತ]**" ಇವರಿಗೆ ತಲುಪುವಂತೆ ಸಲ್ಲಿಸಬೇಕು. ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಚಾಲ್ತಿಯಲ್ಲಿರಬೇಕು.

**7. ಅರ್ಜಿ ಸಲ್ಲಿಸುವ ವಿಧಾನ :**

ಅರ್ಹ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಮಾಹಿತಿಗಳನ್ನು ಭರ್ತಿಮಾಡಿ, ಸಹಿ ಮಾಡಿ, ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕವಾದ:10.08.2009ರ ಸಂಜೆ 05–30 ಗಂಟೆಯೊಳಗೆ, ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯಾದ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಕಚೇರಿಗೆ ಖುದ್ದಾಗಿ ಎರಡು ಪ್ರತಿಗಳನ್ನು ಭಾವ ಚಿತ್ರದೊಂದಿಗೆ [ಸಿ.ಎ.ಸಿ. ಪ್ರತಿ, ಮತ್ತು ಉಪನಿರ್ದೇಶಕರ ಪ್ರತಿ] ಸಲ್ಲಿಸಿ, ಸ್ವೀಕೃತಿ ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅಭ್ಯರ್ಥಿಯು ಖುದ್ದಾಗಿ ಪಡೆಯತಕ್ಕದ್ದು. ಅಂಚೆ ಮೂಲಕ ಸಲ್ಲಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ, ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ.

ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟ ಜನ್ಮ ದಿನಾಂಕ, ಎಸ್.ಎಸ್.ಎಲ್.ಸಿ. / ಪಿ.ಯು.ಸಿ ಮತ್ತು ಟಿ.ಸಿ.ಹೆಚ್ / ಡಿ.ಇಡಿ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷಗಳ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಕ್ಲೇಂ ಮಾಡುತ್ತಿರುವ ಮೀಸಲಾತಿ ಗುಂಪು [ನೇರ ಮತ್ತು ಸಮತಲ] ಪ್ರಮಾಣ ಪತ್ರಗಳ ಸ್ವಯಂ ದೃಢೀಕರಿಸಿದ ಪ್ರತಿಗಳನ್ನು ಉಪನಿರ್ದೇಶಕರಿಗೆ ಸಲ್ಲಿಸುವ ಅರ್ಜಿ ಪ್ರತಿಯೊಂದಿಗೆ ಲಗತ್ತಿಸಬೇಕು.

**8. ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ :**

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ ಹುದ್ದೆಗಳಿಗೆ ತಮ್ಮ ಆದ್ಯತೆಯನ್ನು ನಮೂದಿಸಬೇಕು. ಅರ್ಜಿಯೊಂದಿಗೆ ಸ್ವಯಂದೃಢೀಕೃತ ಪ್ರಮಾಣ ಪತ್ರಗಳ ಸ್ಪಷ್ಟವಾಗಿರುವ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸಬೇಕು. ಪ್ರಾಥಮಿಕ ಶಾಲಾ ಸಹ ಶಿಕ್ಷಕ / ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ "**ವರ್ಗೀಕರಣದ ಅನುಬಂಧದಲ್ಲಿ**" ಪ್ರತ್ಯೇಕವಾಗಿ ನೀಡಲಾಗಿದೆ.

**9. ಅಭ್ಯರ್ಥಿಗಳ ಅರ್ಹತೆ :**

ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು:

**1. ವಿದ್ಯಾರ್ಹತೆ :** ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ, ಅಭ್ಯರ್ಥಿಯು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

**I. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ (ಸಾಮಾನ್ಯ) ಹುದ್ದೆಗಳಿಗೆ :**

ಅ. ಪಿ.ಯು.ಸಿ. ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು. **ಆದರೆ 1989 ಕ್ಕಿಂತ ಮೊದಲು ಟಿ.ಸಿ.ಹೆಚ್. ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಮತ್ತು ಟಿ.ಸಿ.ಹೆಚ್. ಅಥವಾ ಪಿ.ಯು.ಸಿ. ಇಂಟರ್ನ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಅರ್ಹತೆ ಪಡೆಯುತ್ತಾರೆ.**

ಆ. ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಟಿ.ಸಿ.ಹೆಚ್.ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

**ಅಥವಾ**

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ/ಪಿ.ಯು.ಸಿ/ ಟಿ.ಸಿ.ಹೆಚ್‌ನ್ನು ಅಭ್ಯಾಸ ಮಾಡಿರಬೇಕು.

**ಅಥವಾ**

**ಕನ್ನಡ ಮಾಧ್ಯಮದ ಹುದ್ದೆಗಳಿಗೆ :** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

**II. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ವಿಜ್ಞಾನ] ಹುದ್ದೆಗಳಿಗೆ:**

1. ಪಿ.ಯು.ಸಿ.ಯಲ್ಲಿ ವಿಜ್ಞಾನ ಮತ್ತು ಗಣಿತ ವಿಷಯಗಳನ್ನು ಐಚ್ಛಿಕ ವಿಷಯವಾಗಿ ಅಭ್ಯಾಸ ಮಾಡಿರಬೇಕು ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.
2. ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಅಥವಾ ಟಿ.ಸಿ.ಹೆಚ್. ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

**ಅಥವಾ**

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ./ಪಿ.ಯು.ಸಿ./ ಟಿ.ಸಿ.ಹೆಚ್. ಅನ್ನು ಅಭ್ಯಾಸ ಮಾಡಿರಬೇಕು.

**ಅಥವಾ**

**ಕನ್ನಡ ಮಾಧ್ಯಮದ ಹುದ್ದೆಗಳಿಗೆ :** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**III. ಪ್ರಾಥಮಿಕ ಶಾಲಾ ಸಹ ಶಿಕ್ಷಕ / ಶಿಕ್ಷಕಿ (ಆಂಗ್ಲ ಭಾಷೆ) ಹುದ್ದೆಗಳಿಗೆ.**

1. ಪಿ.ಯು.ಸಿ. ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.
2. ಪಿ.ಯು.ಸಿ. ಯಲ್ಲಿ ಆಂಗ್ಲ ಭಾಷೆಯನ್ನು ಪ್ರಥಮ / ದ್ವಿತೀಯ ಭಾಷೆಯನ್ನಾಗಿ ಅಭ್ಯಾಸ ಮಾಡಿ ಅದರಲ್ಲಿ ಕನಿಷ್ಠ ಶೇಕಡ 50 ರಷ್ಟು ಅಂಕಗಳನ್ನು ಪಡೆದಿರಬೇಕು.

**ಅಥವಾ**

ಪಿ.ಯು.ಸಿ. ಮತ್ತು ಟಿ.ಸಿ.ಹೆಚ್.ನ್ನು ಆಂಗ್ಲ ಮಾಧ್ಯಮದಲ್ಲಿ ಅಭ್ಯಾಸ ಮಾಡಿರಬೇಕು.

3. ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಮಾಧ್ಯಮದ ಭಾಷೆಯನ್ನು ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಯಲ್ಲಿ ಪ್ರಥಮ/ದ್ವಿತೀಯ ಭಾಷೆಯನ್ನಾಗಿ ಓದಿರಬೇಕು.

ಅಥವಾ

**ಕನ್ನಡ ಮಾಧ್ಯಮದ ಹುದ್ದೆಗಳಿಗೆ :** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ/ಜಾಣ/ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

**ಸೂಚನೆ:** 1989 ಕ್ಕಿಂತ ಮುಂಚೆ ಇದ್ದ ಪಿ.ಯು.ಸಿ ಇಂಟರ್ನ್‌ಶಿಪ್ ಪರೀಕ್ಷೆಯನ್ನು ಎಸ್.ಎಸ್.ಎಲ್.ಸಿ. ನಂತರ ಟಿ.ಸಿಹೆಚ್.ಗೆ ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವುದರಿಂದ ಪಿ.ಯುಸಿ ಇಂಟರ್ನ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು ವೃಂದ ಮತ್ತು ನೇಮಕಾತಿ ನಿಯಮಗಳ 2001ರ ತಿದ್ದುಪಡಿಯಲ್ಲಿ ನಿಯಮ-66ರ ವಿದ್ಯಾರ್ಹತೆ ಕಾಲಂನಲ್ಲಿ ಸ್ಪಷ್ಟವಾಗಿ ನಮೂದಿಸಲಾಗಿದೆ. ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ಆಂಗ್ಲ ಭಾಷಾ ಮತ್ತು ವಿಜ್ಞಾನ ಹುದ್ದೆಗಳಿಗೆ ಅರ್ಹರಾಗುವುದಿಲ್ಲ. 1989ರ ನಂತರ ಪಿ.ಯು.ಸಿ. ಇಂಟರ್ನ್‌ಶಿಪ್ ಪರೀಕ್ಷೆಯನ್ನು ಇತರೆ ವಿಷಯಗಳ ಪಿ.ಯು.ಸಿ. ಪರೀಕ್ಷೆಗೆ ತತ್ಸಮಾನ ಎಂದು ಪರಿಗಣಿಸಲಾಗಿದೆ.

**IV. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ ಕನ್ನಡ ಮಾಧ್ಯಮದ ಶಾಲೆಗಳಲ್ಲಿ (ಹಿಂದಿ ಭಾಷೆ) ಹುದ್ದೆಗಳಿಗೆ.**

**1.** ಪಿ.ಯು.ಸಿ. ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

- ಆದರೆ 1989 ಕ್ಕಿಂತ ಮೊದಲು ಟಿ.ಸಿ.ಹೆಚ್. ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಅರ್ಹತೆ ಪಡೆಯುತ್ತಾರೆ.

**2.** ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಯಲ್ಲಿ ಹಿಂದಿಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

**ಅಥವಾ**

ಕೆಳಕಂಡ ಯಾವುದಾದರೊಂದು ಪರೀಕ್ಷೆ ಅಥವಾ ರಾಜ್ಯ ಸರ್ಕಾರದಿಂದ ತತ್ಸಮಾನವೆಂದು ಅನುಮೋದಿತವಾದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

ಅ. ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ ಚಾಮರಾಜಪೇಟೆ ಸಂಸ್ಥೆಯ **ಹಿಂದಿ ಭಾಷಾ ಭೂಷಣ.**

ಆ. ಮೈಸೂರು ಹಿಂದಿ ಪ್ರಚಾರ ಪರಿಷತ್ ಸಂಸ್ಥೆಯ **ಹಿಂದಿ ಉತ್ತಮ.**

ಇ. ಕರ್ನಾಟಕ ಹಿಂದಿ ಪ್ರಚಾರ ಸಮಿತಿ ಜಯನಗರ ಸಂಸ್ಥೆಯ **ರಾಜಭಾಷಾ ಪ್ರಕಾಶ.**

ಈ. ದಕ್ಷಿಣ ಹಿಂದಿ ಪ್ರಚಾರ ಸಭಾ ಮದರಾಸು ಸಂಸ್ಥೆಯ **ರಾಷ್ಟ್ರಭಾಷ ವಿಶಾರದ**

**3.** ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಅಥವಾ ಟಿ.ಸಿ.ಹೆಚ್. ಪರೀಕ್ಷೆಯನ್ನು ಕನ್ನಡ ಮಾಧ್ಯಮದಲ್ಲಿ ಅಥವಾ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

**ಅಥವಾ**

ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ/ಜಾಣ/ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**C&R Rules ನಲ್ಲಿ: "NOTE : Primary School Assistant Masters / Mistress (Science) (English) (Hindi) in Primary Higher Primary and Model Higher Primary Schools shall form part of the General cadre and they shall teach other subjects also in addition to Science / English / Hindi to make up the normal work load for the teacher."** ಎಂದಿರುತ್ತದೆ.

ಆದ್ದರಿಂದ ಪ್ರಾಥಮಿಕ, ಹಿರಿಯ ಹಾಗೂ ಮಾದರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನ / ಆಂಗ್ಲ / ಹಿಂದಿ ಪ್ರಾಥಮಿಕ ಶಾಲಾ ಸಹ ಶಿಕ್ಷಕರು ಸಾಮಾನ್ಯ ಶಿಕ್ಷಕರ ಹುದ್ದೆಯ ಭಾಗವಾಗಿರುತ್ತಾರೆ. ಈ ಶಿಕ್ಷಕರು ಕಾರ್ಯಭಾರ ಹೊಂದಾಣಿಕೆಗೆ ವಿಜ್ಞಾನ / ಆಂಗ್ಲ / ಹಿಂದಿ ವಿಷಯಗಳೊಂದಿಗೆ ಇತರೆ ವಿಷಯಗಳನ್ನು ಸಹಾ ಸಂಬಂಧಿಸಿದ ಶಾಲಾ ಮಾಧ್ಯಮಗಳಲ್ಲಿ ಬೋಧಿಸತಕ್ಕದ್ದು.

**ಸೂಚನೆ:** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ. ನಿಗದಿ ಪಡಿಸಿದ ಕೊನೆಯ ದಿನಾಂಕದಂದು ವಿದ್ಯಾರ್ಹತೆಯ ಅಂಕಪಟ್ಟಿ, ಹಾಗೂ ಇತರ ಸರ್ಟಿಫಿಕೇಟ್ ಗಳನ್ನು ಪಡೆದಿರಬೇಕು.

**10. ವಯೋಮಿತಿ :**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

[ಅ] ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

[ಆ] ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 40 ವರ್ಷ |
| 2ಎ, 2ಬಿ, 3ಎ, 3ಬಿ | 43 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ-1 | 45 ವರ್ಷ |

**ಸೂಚನೆ:** ಗೌರವ ಶಿಕ್ಷಕರಿಗೆ ಗರಿಷ್ಠ ವಯೋಮಿತಿ ಅನ್ವಯಿಸುವುದಿಲ್ಲ.

**11. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವಿವರಗಳು :**

ಅ. **ಪರೀಕ್ಷೆಯ ಹೆಸರು:** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕ ಶಾಲಾ ಸಹ ಶಿಕ್ಷಕ / ಶಿಕ್ಷಕಿಯರ ಹುದ್ದೆಗಳ ನೇಮಕಾತಿಗೆ ನಡೆಸುವ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ. ಪ್ರತಿ ಅಭ್ಯರ್ಥಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

ಆ. **ಪರೀಕ್ಷೆ ನಡೆಸುವ ಪ್ರಾಧಿಕಾರ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು [ಆಡಳಿತ] ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ತಮ್ಮ ಶೈಕ್ಷಣಿಕ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸುವರು.

ಇ. **ಪರೀಕ್ಷೆ ನಡೆಸುವ ದಿನಾಂಕ:** 13.09.2009.

ಈ. **ಪರೀಕ್ಷಾ ಅವಧಿ ಹಾಗೂ ಸಮಯ:** ಬೆಳಗ್ಗೆ 10.30 ರಿಂದ ಮಧ್ಯಾಹ್ನ 1.30

ಉ. **ಪ್ರಶ್ನೆ ಪತ್ರಿಕೆ – ವಿಷಯ ಹಾಗೂ ಅಂಕಗಳು:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ಆರು ವಿಷಯಗಳನ್ನೊಳಗೊಂಡ ಒಂದು ಪ್ರಶ್ನೆ ಪತ್ರಿಕೆಯನ್ನು ಹೊಂದಿರುವುದು. ಪ್ರತಿ ವಿಷಯದಲ್ಲಿ ಒಂದು ಅಂಕದ 25 ಪ್ರಶ್ನೆಗಳಿದ್ದು ಆರು ವಿಷಯಗಳಿಗೆ ಒಟ್ಟು 150 ಅಂಕಗಳನ್ನು ನಿಗದಿಪಡಿಸಲಾಗಿದೆ.

**ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ ಕೆಳಗಿನಂತಿದೆ.**

| ಕ್ರಸಂ | ವಿಷಯ | ಅಂಕಗಳು |
|---|---|---|
| 01. | ಸಾಮಾನ್ಯ ಜ್ಞಾನ | 25 |
| 02. | ಭಾಷೆ:ಕನ್ನಡ/ಉರ್ದು/ಮರಾಠಿ/ತಮಿಳು/ತೆಲುಗು | 25 |
| 03. | ಆಂಗ್ಲ ಭಾಷೆ | 25 |
| 04. | ಸಾಮಾನ್ಯ ವಿಜ್ಞಾನ | 25 |
| 05. | ಗಣಿತ | 25 |
| 06. | ಸಮಾಜ ವಿಜ್ಞಾನ | 25 |
| ಒಟ್ಟು | | **150** |

**12. ಪರೀಕ್ಷಾ ವಿಷಯಗಳಿಗೆ ನಿಗದಿಪಡಿಸಿರುವ ಪಠ್ಯ ವಸ್ತು :**

**1. ಸಾಮಾನ್ಯ ಜ್ಞಾನ :**

**2. ಭಾಷೆ :** ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು, ಮಲಯಾಳಂ

**3. ಆಂಗ್ಲ ಭಾಷೆ : 4. ವಿಜ್ಞಾನ : 5. ಗಣಿತ : 6. ಸಮಾಜ ವಿಜ್ಞಾನ :**

**4. ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ :**

ಅ. ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯ ವಸ್ತುವಿನ ವ್ಯಾಪ್ತಿಯಲ್ಲಿ ಬರುತ್ತದೆ.

ಆ. ಪ್ರಶ್ನೆಗಳು ವಸ್ತುನಿಷ್ಠವಾಗಿ ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

ಇ. ಪ್ರತಿ ಪ್ರಶ್ನೆ 4 ಉತ್ತರಗಳನ್ನು ಹೊಂದಿದ್ದು ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

ಈ. ಉತ್ತರಗಳನ್ನು 'ಓ.ಎಂ.ಆರ್.' ಶೀಟಿನಲ್ಲಿ ಗುರುತಿಸುವುದು.

ಉ. ಪ್ರಶ್ನೆ ಪತ್ರಿಕೆಗಳು ಪ್ರತಿ ಮಾಧ್ಯಮದ ಹುದ್ದೆಗಳಿಗೆ ಆಯಾ ಮಾಧ್ಯಮದ ಭಾಷೆಗಳಲ್ಲಿ ಇರುತ್ತವೆ.

**13. ಪ್ರಮುಖವಾದ ಸೂಚನೆಗಳು:**

1. ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ. ಅಭ್ಯರ್ಥಿಗೆ ಪ್ರವೇಶ ಪತ್ರವನ್ನು ಅರ್ಜಿ ಸ್ವೀಕರಿಸಿದ ಸಮಯದಲ್ಲಿ ನೀಡಲಾಗುವುದು. ಆದರೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

2. ಅರ್ಜಿಗಳನ್ನು ದಿನಾಂಕ:10.08.2009ರ ಸಂಜೆ 5.30ರೊಳಗೆ ಆಯ್ಕೆ ಪ್ರಾಧಿಕಾರಿಗೆ ಖುದ್ದಾಗಿ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
3. ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿಯೊಂದಿಗೆ ಎಲ್ಲಾ ಪ್ರಮಾಣ ಪತ್ರಗಳ ಸ್ವದೃಢೀಕೃತ ಸ್ಪಷ್ಟವಾಗಿ ಕಾಣಿಸುವ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು. ಅಪೂರ್ಣ ಮತ್ತು ಅಸ್ಪಷ್ಟ ಜೆರಾಕ್ಸ್ ಪ್ರತಿಗಳನ್ನೊಳಗೊಂಡ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. **ಈ ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.** ಆದರೆ ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗಾಗಿ ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.
4. ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ **ಆರು [06]** ಭಾವಚಿತ್ರಗಳನ್ನು ಸಲ್ಲಿಸುವುದು. ಅದರಲ್ಲಿ ಅರ್ಜಿ ನಮೂನೆಯಲ್ಲಿ–3, ಸ್ವೀಕೃತಿ ಪತ್ರದಲ್ಲಿ–1 ಪ್ರವೇಶ ಪತ್ರ ದ್ವಿಪ್ರತಿಗಳಲ್ಲಿ –2 ತಪ್ಪದೆ ಅಂಟಿಸಿ ಲಗತ್ತಿಸಬೇಕು. ಅರ್ಜಿ ನಮೂನೆಯಲ್ಲಿ ಲಗತ್ತಿಸಿರುವ ಭಾವಚಿತ್ರವನ್ನು ಮಾತ್ರ ಸಂಬಂಧಿತ ಉಪನಿರ್ದೇಶಕರುಗಳಿಂದ ದೃಢೀಕರಿಸಿರಬೇಕು. ಉಳಿದ ಭಾವಚಿತ್ರಗಳನ್ನು ದೃಢೀಕರಿಸಬಾರದು.
5. ಪ್ರಮಾಣ ಪತ್ರಗಳ ಪರಿಶೀಲನೆಯ ಸಮಯದಲ್ಲಿ **ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡು ಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.**
6. ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.
7. ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.
8. ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈ ಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.
9. ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ಜೇಷ್ಠತಾ ಘಟಕ [ತಾಲ್ಲೂಕು] ದಲ್ಲಿ ಮಾತ್ರ ಸೇವೆ ಸಲ್ಲಿಸಬೇಕಾಗಿರುತ್ತದೆ.
10. ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ಆಯ್ಕೆ ಪ್ರಾಧಿಕಾರ ನೀಡುತ್ತದೆ. ಆದ್ದರಿಂದ ನಿಗದಿ ಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.
11. ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ, ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.
12. ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
13. ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಡೆದಿರುವ ಮಾಹಿತಿ ಪುಸ್ತಕ, ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಪುಸ್ತಕದಲ್ಲಿ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ [Horizontal & vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.
14. **ದುರ್ನಡತೆ:** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಾಸ್ತಾವೇಜು ಅಥವಾ ತಿದ್ದಲಾದ ದಾಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ: ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

ಹೆಚ್ಚಿನ ವಿವರಗಳಿಗೆ ಅರ್ಜಿ ನಮೂನೆ ಮತ್ತು ಮಾಹಿತಿ ಪುಸ್ತಕದಲ್ಲಿನ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ] ಇವರ ಕಛೇರಿಯನ್ನು ಸಂಪರ್ಕಿಸಬಹುದು.

**ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪ ನಿರ್ದೇಶಕರು**
ಸಾರ್ವಜನಿಕ ಶಿಕ್ಷಣ ಇಲಾಖೆ,
**ಬೆಂಗಳೂರು ಉತ್ತರ ಜಿಲ್ಲೆ.**

## ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ. 2009–10ನೇ ಸಾಲಿನ ನೇಮಕಾತಿ.

**ತಾಲ್ಲೂಕು : ಉತ್ತರ ವಲಯ–1** **ವಿಷಯ: ಕನ್ನಡ ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| | ಇತರೆ | 03 | – | 01 | 03 | – | – | 01 | 13 | 21 |
| | ಗ್ರಾಮೀಣ | 02 | 01 | 01 | 02 | 01 | 01 | 01 | 07 | 16 |
| | ಕ.ಮ.ಅ | 01 | – | – | 01 | – | – | – | 02 | 04 |
| | ಯೋ.ನಿ.ಅ | 01 | – | – | – | – | – | – | 01 | 02 |
| 54 | ಮಾ.ಸೈ | 01 | – | – | 01 | – | – | – | 03 | 05 |
| | ಅಂ.ವಿ | – | 01 | 01 | – | 01 | 01 | 01 | 01 | 06 |
| | ಒಟ್ಟು | 08 | 02 | 03 | 07 | 02 | 02 | 03 | 27 | 54 |

**ತಾಲ್ಲೂಕು : ಉತ್ತರ ವಲಯ–3** **ವಿಷಯ: ಕನ್ನಡ ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| | ಇತರೆ | – | – | – | – | – | 01 | – | – | 01 |
| | ಗ್ರಾಮೀಣ | – | – | – | – | – | – | – | – | – |
| | ಕ.ಮ.ಅ | – | – | – | – | – | – | – | – | – |
| | ಯೋ.ನಿ.ಅ | – | – | – | – | – | – | – | – | – |
| 02 | ಮಾ.ಸೈ | – | – | – | – | – | – | – | – | – |
| | ಅಂ.ವಿ | – | – | – | – | – | – | – | 01 | 01 |
| | ಒಟ್ಟು | – | – | – | – | – | 01 | – | 01 | 02 |

**ತಾಲ್ಲೂಕು : ಉತ್ತರ ವಲಯ–4** **ವಿಷಯ: ಕನ್ನಡ ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| | ಇತರೆ | 01 | – | – | 01 | – | – | – | 01 | 03 |
| | ಗ್ರಾಮೀಣ | – | 01 | – | – | – | 01 | – | 01 | 03 |
| | ಕ.ಮ.ಅ | – | – | – | – | – | – | – | – | – |
| 07 | ಯೋ.ನಿ.ಅ | – | – | – | – | – | – | – | 01 | 01 |
| | ಮಾ.ಸೈ | – | – | – | – | – | – | – | – | – |
| | ಅಂ.ವಿ | – | – | – | – | – | – | – | – | – |
| | ಒಟ್ಟು | 01 | 01 | – | 01 | – | 01 | – | 03 | 07 |

**ತಾಲ್ಲೂಕು : ಉತ್ತರ ವಲಯ–1** **ವಿಷಯ: ಉರ್ದು ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| | ಇತರೆ | – | – | – | – | – | – | – | – | – |
| | ಗ್ರಾಮೀಣ | – | – | – | – | – | – | – | 01 | 01 |
| | ಕ.ಮ.ಅ | – | – | – | – | – | – | – | – | – |
| | ಯೋ.ನಿ.ಅ | – | – | – | – | – | – | – | – | – |
| 01 | ಮಾ.ಸೈ | – | – | – | – | – | – | – | – | – |
| | ಅಂ.ವಿ | – | – | – | – | – | – | – | – | – |
| | ಒಟ್ಟು | – | – | – | – | – | – | – | 01 | 01 |

**ತಾಲ್ಲೂಕು : ಉತ್ತರ ವಲಯ–3** **ವಿಷಯ: ಉರ್ದು ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| | ಇತರೆ | – | – | – | – | – | – | – | 01 | 01 |
| | ಗ್ರಾಮೀಣ | – | – | – | – | – | – | – | – | – |
| | ಕ.ಮ.ಅ | – | – | – | – | – | – | – | – | – |
| | ಯೋ.ನಿ.ಅ | – | – | – | – | – | – | – | – | – |
| 01 | ಮಾ.ಸೈ | – | – | – | – | – | – | – | – | – |
| | ಅಂ.ವಿ | – | – | – | – | – | – | – | – | – |
| | ಒಟ್ಟು | – | – | – | – | – | – | – | 01 | 01 |

**ತಾಲ್ಲೂಕು : ಉತ್ತರ ವಲಯ–4** **ವಿಷಯ: ಉರ್ದು ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| | ಇತರೆ | 01 | – | – | – | – | – | – | – | 01 |
| | ಗ್ರಾಮೀಣ | – | – | – | – | – | – | – | – | – |
| | ಕ.ಮ.ಅ | – | – | – | – | – | – | – | – | – |
| | ಯೋ.ನಿ.ಅ | – | – | – | – | – | – | – | – | – |
| 02 | ಮಾ.ಸೈ | – | – | – | – | – | – | – | – | – |
| | ಅಂ.ವಿ | – | – | – | – | – | – | – | 01 | 01 |
| | ಒಟ್ಟು | 01 | – | – | – | – | – | – | 01 | 02 |

**ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ. 2009–10ನೇ ಸಾಲಿನ ನೇಮಕಾತಿ.**

**ತಾಲ್ಲೂಕು : ಉತ್ತರ ವಲಯ–1** **ವಿಷಯ: ಹಿಂದಿ ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| 02 | ಇತರೆ | – | 01 | – | – | – | – | – | 01 | 02 |
| | ಗ್ರಾಮೀಣ | – | – | – | – | – | – | – | – | – |
| | ಕ.ಮ.ಅ | – | – | – | – | – | – | – | – | – |
| | ಯೋ.ನಿ.ಅ | – | – | – | – | – | – | – | – | – |
| | ಮಾ.ಸೈ | – | – | – | – | – | – | – | – | – |
| | ಅಂ.ವಿ | – | – | – | – | – | – | – | – | – |
| | ಒಟ್ಟು | – | 01 | – | – | – | – | – | 01 | 02 |

**ತಾಲ್ಲೂಕು : ಉತ್ತರ ವಲಯ–3** **ವಿಷಯ: ಹಿಂದಿ ಸಾಮಾನ್ಯ**

| ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|
| 01 | ಇತರೆ | 01 | – | – | – | – | – | – | – | 01 |
| | ಗ್ರಾಮೀಣ | – | – | – | – | – | – | – | – | – |
| | ಕ.ಮ.ಅ | – | – | – | – | – | – | – | – | – |
| | ಯೋ.ನಿ.ಅ | – | – | – | – | – | – | – | – | – |
| | ಮಾ.ಸೈ | – | – | – | – | – | – | – | – | – |
| | ಅಂ.ವಿ | – | – | – | – | – | – | – | – | – |
| | ಒಟ್ಟು | 01 | – | – | – | – | – | – | – | 01 |

**ಉಪ ನಿರ್ದೇಶಕರು**
ಸಾ.ಶಿ.ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ.

**ವಿಶೇಷ ಪತ್ರಿಕೆ**

| ಭಾಗ – V | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜ್ಯೇಷ್ಠ ೧೪, ಶಕ ವರ್ಷ ೧೯೩೧) | ನಂ. ೩೮೨ |
|---|---|---|

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ದಕ್ಷಿಣ ಜಿಲ್ಲೆ**

**ನೇಮಕಾತಿ ಅಧಿಸೂಚನೆ**

**ಸಂಖ್ಯೆ: ಪಿ3(1) ಪ್ರಾಶಾಶಿ : ನೇಮಕ : 2009–10, ದಿನಾಂಕ: 4ನೇ ಜೂನ್, 2009**

**ವಿಷಯ :–** 2009–10ನೇ ಸಾಲಿಗಾಗಿ ಸರ್ಕಾರಿ ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :–**
1) ಸರ್ಕಾರದ ಅಧಿಕೃತ ಪ್ರಕಟಣೆ ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ: 9.8.2001.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95, ದಿ: 20.06.1995.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002, ದಿ: 22.11.2002.
4) ಸರ್ಕಾರಿ ಆದೇಶ ಸಂಖ್ಯೆ: ಇಡಿ325 ಎಂಸಿಡಿ 2006, ದಿ: 15.12.2006.
5) ಸರ್ಕಾರ ಆದೇಶ ಸಂಖ್ಯೆ: ಸಿಆಸುಇ:53:ಸೇನೇನಿ:2007, ದಿ: 04.01.2008.
6) ಸರ್ಕಾರಿ ಆದೇಶ ಸಂಖ್ಯೆ: ಇಡಿ:214:ಎಂ.ಸಿಡಿ:2007, [ಭಾಗ], ದಿ: 26.05.2009 [ಇಡಿ:66:ಸ್ವೀಮರ (ಯುನಿಕ್), ದಿನಾಂಕ:26.05.2009]
7) ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ:16:ಸೇನೆನಿ:2008, ದಿ: 01.09.2008.

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಅಂದರೆ "**ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್] [ರಿಕ್ರೂಟ್‌ಮೆಂಟ್] [ಅಮೆಂಡ್‌ಮೆಂಟ್] ರೂಲ್ಸ್ 2001 [ಸಂ:ಡಿಪಿಎಆರ್:.41:ಎಸ್‌ಆರ್‌ಇ:2001 ದಿನಾಂಕ:09.08.2001**"]ರ ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ **ದಿನಾಂಕ: 10.08.2009 ರಂದು** ಅರ್ಹರಾಗಿರುವ ಅಭ್ಯರ್ಥಿಗಳಿಂದ, ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಅರ್ಜಿಗಳನ್ನು ಕರೆಯಲಾಗಿದೆ. ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

**ಟಿಪ್ಪಣಿ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

**1. ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು ಹಾಗೂ ವೇತನ ಶ್ರೇಣಿ :**

01. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲಗು, ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

02. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ವಿಜ್ಞಾನ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲಗು, ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

03. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಕನ್ನಡ, ಉರ್ದು, ಮರಾಠಿ, ತಮಿಳು, ತೆಲಗು, ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

04. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ಹಿಂದಿ] ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

**ವೇತನ ಶ್ರೇಣಿ: 6800–150–7100–175–7800–200–8600–225–9500–250–10500–300–12300–350–13000.**

**2. ಆಯ್ಕೆಗೆ ಅರ್ಹತೆ:**

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ. ಅಥವಾ ಪಿ.ಯುಸಿ.ಯಲ್ಲಿ ಪ್ರಥಮ / ದ್ವಿತೀಯ ಭಾಷೆಯಾಗಿ ಅಥವಾ ಮಾಧ್ಯಮವಾಗಿ ವ್ಯಾಸಂಗ ಮಾಡಿರಬೇಕು.

**3. ನಿಗದಿತ ಅರ್ಜಿ ನಮೂನೆ ದೊರೆಯುವ ಸ್ಥಳ:**

ನಿಗದಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕದಲ್ಲಿ ಲಗತ್ತಿಸಲಾಗಿದೆ. ಈ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕವು ಎಲ್ಲಾ ವರ್ಗದ ಹುದ್ದೆಗಳಿಗೆ ಅಂದರೆ ಸಾಮಾನ್ಯ, ವಿಜ್ಞಾನ, ಆಂಗ್ಲ ಮತ್ತು ಹಿಂದಿ, ಉರ್ದು ಇತ್ಯಾದಿ ಹುದ್ದೆಗಳಿಗೆ ಒಂದೇ ಆಗಿರುತ್ತದೆ. ಈ ಪುಸ್ತಕವು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು [ಆಡಳಿತ] ರವರ ಕಛೇರಿಗಳಲ್ಲಿ ದಿನಾಂಕ: 09.07.2009 ರಿಂದ ದಿನಾಂಕ:10.08.2009 ರವರೆಗೆ ಕಾರ್ಯಾಲಯದ ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10.00 ರಿಂದ ಸಂಜೆ 5.30 ರವರೆಗೆ ದೊರೆಯುತ್ತದೆ. ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು ವಿಶೇಷಾಧಿಕಾರಿ, ಕೇಂದ್ರೀಯ ದಾಖಲಾತಿ ಘಟಕ, ಬೆಂಗಳೂರು ಇವರ ಹೆಸರಿನಲ್ಲಿ ನಿಗದಿಪಡಿಸಿದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರು ಶಾಖೆಯಲ್ಲಿ ತ್ರಿಪ್ರತಿ ಚಲನ್ ನಲ್ಲಿ **[Payable at 007** ಎಂದು ಬರೆದು] ಹಣ ಪಾವತಿಸಿ ಮಾಹಿತಿ ಪುಸ್ತಕ ಮತ್ತು ಅರ್ಜಿ ನಮೂನೆ ಪುಸ್ತಕಗಳನ್ನು ಪಡೆಯಬಹುದು.

**4. ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕದ ಶುಲ್ಕ :**

1. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ : ರೂ. 150.00
2. ಇತರೆ ಎಲ್ಲಾ ಅಭ್ಯರ್ಥಿಗಳಿಗೆ : ರೂ. 300.00
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್:142:ಎಸ್ಆರ್ಆರ್:2006, ದಿ: 05.11.2007ರ ರೀತ್ಯಾ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಪಾವತಿಸಲು ವಿನಾಯ್ತಿ ಕಲ್ಪಿಸಿದೆ.

**5. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:**

ದಿನಾಂಕ:10.08.2009ರ ಸಂಜೆ 5.30 ಒಳಗೆ ಅಥವಾ ಅದಕ್ಕೂ ಮೊದಲು.

**6. ಅರ್ಜಿ ಸ್ವೀಕರಿಸುವ ಸ್ಥಳ ಹಾಗೂ ವಿಳಾಸ:**

ಅರ್ಹ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಯ ದ್ವಿಪ್ರತಿಗಳನ್ನು [ಸಿ.ಎ.ಸಿ. ಪ್ರತಿ, ಮತ್ತು ಉಪನಿರ್ದೇಶಕರ ಪ್ರತಿ] ಭರ್ತಿ ಮಾಡಿ, ಪ್ರಮಾಣ ಪತ್ರಗಳ ಸ್ವದೃಢೀಕೃತ ಜೆರಾಕ್ಸ್ ಪ್ರತಿಗಳು ಮತ್ತು ಆರು [06] ಭಾವಚಿತ್ರಗಳೊಂದಿಗೆ ದಿನಾಂಕ:10.08.2009ರಂದು ಸಂಜೆ 5.30 ರೊಳಗೆ ಅಥವಾ ಅದಕ್ಕೂ ಮೊದಲು ಸಂಬಂಧಿಸಿದ "**ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪ ನಿರ್ದೇಶಕರು [ಆಡಳಿತ]**" ಇವರಿಗೆ ತಲುಪುವಂತೆ ಸಲ್ಲಿಸಬೇಕು. ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಚಾಲ್ತಿಯಲ್ಲಿರಬೇಕು.

**7. ಅರ್ಜಿ ಸಲ್ಲಿಸುವ ವಿಧಾನ :**

ಅರ್ಹ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಮಾಹಿತಿಗಳನ್ನು ಭರ್ತಿಮಾಡಿ, ಸಹಿ ಮಾಡಿ, ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕವಾದ:10.08.2009ರ ಸಂಜೆ 05–30 ಗಂಟೆಯೊಳಗೆ, ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯಾದ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಕಚೇರಿಗೆ ಖುದ್ದಾಗಿ ಎರಡು ಪ್ರತಿಗಳನ್ನು ಭಾವ ಚಿತ್ರದೊಂದಿಗೆ [ಸಿ.ಎ.ಸಿ. ಪ್ರತಿ, ಮತ್ತು ಉಪನಿರ್ದೇಶಕರ ಪ್ರತಿ] ಸಲ್ಲಿಸಿ, ಸ್ವೀಕೃತಿ ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅಭ್ಯರ್ಥಿಯು ಖುದ್ದಾಗಿ ಪಡೆಯತಕ್ಕದ್ದು. ಅಂಚೆ ಮೂಲಕ ಸಲ್ಲಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ, ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ.

ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟ ಜನ್ಮ ದಿನಾಂಕ, ಎಸ್.ಎಸ್.ಎಲ್.ಸಿ. / ಪಿ.ಯು.ಸಿ ಮತ್ತು ಟಿ.ಸಿ.ಹೆಚ್ / ಡಿ.ಇಡಿ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷಗಳ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಕ್ಲೇಂ ಮಾಡುತ್ತಿರುವ ಮೀಸಲಾತಿ ಗುಂಪು [ನೇರ ಮತ್ತು ಸಮತಲ] ಪ್ರಮಾಣ ಪತ್ರಗಳ ಸ್ವಯಂ ದೃಢೀಕರಿಸಿದ ಪ್ರತಿಗಳನ್ನು ಉಪನಿರ್ದೇಶಕರಿಗೆ ಸಲ್ಲಿಸುವ ಅರ್ಜಿ ಪ್ರತಿಯೊಂದಿಗೆ ಲಗತ್ತಿಸಬೇಕು.

**8. ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ :**

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ ಹುದ್ದೆಗಳಿಗೆ ತಮ್ಮ ಆದ್ಯತೆಯನ್ನು ನಮೂದಿಸಬೇಕು. ಅರ್ಜಿಯೊಂದಿಗೆ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳ ಸ್ಪಷ್ಟವಾಗಿರುವ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸಬೇಕು. ಪ್ರಾಥಮಿಕ ಶಾಲಾ ಸಹ ಶಿಕ್ಷಕ / ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ "**ವರ್ಗೀಕರಣದ ಅನುಬಂಧದಲ್ಲಿ**" ಪ್ರತ್ಯೇಕವಾಗಿ ನೀಡಲಾಗಿದೆ.

**9. ಅಭ್ಯರ್ಥಿಗಳ ಅರ್ಹತೆ :**

ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು:

1. **ವಿದ್ಯಾರ್ಹತೆ :** ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ, ಅಭ್ಯರ್ಥಿಯು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

**I. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ (ಸಾಮಾನ್ಯ) ಹುದ್ದೆಗಳಿಗೆ :**

ಅ. ಪಿ.ಯು.ಸಿ. ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು. **ಆದರೆ 1989 ಕ್ಕಿಂತ ಮೊದಲು ಟಿ.ಸಿ.ಹೆಚ್. ಕೋರ್ಸಿಗೆ ಪ್ರವೇಶ ಪಡೆದ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಮತ್ತು ಟಿ.ಸಿ.ಹೆಚ್. ಅಥವಾ ಪಿ.ಯು.ಸಿ. ಇಂಟರ್ನ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಅರ್ಹತೆ ಪಡೆಯುತ್ತಾರೆ.**

ಆ. ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಟಿ.ಸಿ.ಹೆಚ್.ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

**ಅಥವಾ**

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ/ಪಿ.ಯು.ಸಿ/ ಟಿ.ಸಿ.ಹೆಚ್‌ನ್ನು ಅಭ್ಯಾಸ ಮಾಡಿರಬೇಕು.

**ಅಥವಾ**

**ಕನ್ನಡ ಮಾಧ್ಯಮದ ಹುದ್ದೆಗಳಿಗೆ :** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಕನ್ನಡ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

**II. ಪ್ರಾಥಮಿಕ ಶಾಲಾ ಸಹ ಶಿಕ್ಷಕ/ಶಿಕ್ಷಕಿ [ವಿಜ್ಞಾನ] ಹುದ್ದೆಗಳಿಗೆ:**

1. ಪಿ.ಯು.ಸಿ.ಯಲ್ಲಿ ವಿಜ್ಞಾನ ಮತ್ತು ಗಣಿತ ವಿಷಯಗಳನ್ನು ಐಚ್ಛಿಕ ವಿಷಯವಾಗಿ ಅಭ್ಯಾಸ ಮಾಡಿರಬೇಕು ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.
2. ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷೆಯನ್ನು ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಅಥವಾ ಟಿ.ಸಿ.ಹೆಚ್. ನಲ್ಲಿ ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

**ಅಥವಾ**

ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ./ಪಿ.ಯು.ಸಿ./ ಟಿ.ಸಿ.ಹೆಚ್. ಅನ್ನು ಅಭ್ಯಾಸ ಮಾಡಿರಬೇಕು.

**ಅಥವಾ**

**ಕನ್ನಡ ಮಾಧ್ಯಮದ ಹುದ್ದೆಗಳಿಗೆ :** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**III. ಪ್ರಾಥಮಿಕ ಶಾಲಾ ಸಹ ಶಿಕ್ಷಕ / ಶಿಕ್ಷಕಿ (ಆಂಗ್ಲ ಭಾಷೆ) ಹುದ್ದೆಗಳಿಗೆ.**

1. ಪಿ.ಯು.ಸಿ. ಮತ್ತು ಟಿ.ಸಿ.ಹೆಚ್. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.
2. ಪಿ.ಯು.ಸಿ. ಯಲ್ಲಿ ಆಂಗ್ಲ ಭಾಷೆಯನ್ನು ಪ್ರಥಮ / ದ್ವಿತೀಯ ಭಾಷೆಯನ್ನಾಗಿ ಅಭ್ಯಾಸ ಮಾಡಿ ಅದರಲ್ಲಿ ಕನಿಷ್ಠ ಶೇಕಡ 50 ರಷ್ಟು ಅಂಕಗಳನ್ನು ಪಡೆದಿರಬೇಕು.

**ಅಥವಾ**

ಪಿ.ಯು.ಸಿ. ಮತ್ತು ಟಿ.ಸಿ.ಹೆಚ್.ನ್ನು ಆಂಗ್ಲ ಮಾಧ್ಯಮದಲ್ಲಿ ಅಭ್ಯಾಸ ಮಾಡಿರಬೇಕು.

3. ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಮಾಧ್ಯಮದ ಭಾಷೆಯನ್ನು ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಯಲ್ಲಿ ಪ್ರಥಮ/ದ್ವಿತೀಯ ಭಾಷೆಯನ್ನಾಗಿ ಓದಿರಬೇಕು.

ಅಥವಾ

**ಕನ್ನಡ ಮಾಧ್ಯಮದ ಹುದ್ದೆಗಳಿಗೆ :** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ/ಜಾಣ/ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

